CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೧೦, ೨೦೦೫ (ಮಾಘ ೨೧, ಶಕ ವರ್ಷ ೧೯೨೬) | ಸಂಚಿಕೆ ೬ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಲೋಕೋಪಯೋಗಿ ಇಲಾಖೆ**

**ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ, ಶಿವಮೊಗ್ಗ ವಿಭಾಗ, ಶಿವಮೊಗ್ಗ**

**ಟೆಂಡರ್ ಪ್ರಕಟಣೆ ಸಂಖ್ಯೆ: ಕಾ.ಅ: ಶಿ.ವಿ.ಶಿ : ಸ.ಇ-2/ರಸ್ತೆ/34/2004-05/4040, ಶಿವಮೊಗ್ಗ, ದಿನಾಂಕ: 4ನೇ ಫೆಬ್ರವರಿ 2005**

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತರಾದ ಗುತ್ತಿಗೆದಾರರಿಂದ ಈ ಕೆಳಕಂಡ ಕೆಲಸಗಳಿಗೆ ನಿಗದಿತ ನಮೂನೆಯಲ್ಲಿ ಮೊಹರಾದ ಲಕೋಟೆಯ ಮೇಲೆ ಕೆಲಸದ ಹೆಸರುಗಳನ್ನು ಬರೆದಿರುವ ಐಟಂ ರೇಟ್ ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗಡೆ ಸಹಿ ಮಾಡಿರುವವರು ಆಹ್ವಾನಿಸಿರುತ್ತಾರೆ. ಅವುಗಳನ್ನು ಈ ಕೆಳಗೆ ಸೂಚಿಸಿರುವ ದಿನಾಂಕಗಳಂದು ಸಾಯಂಕಾಲ 4.30 ಗಂಟೆಯವರೆಗೆ ಸ್ವೀಕರಿಸಲಾಗುವುದು. ಸಾಧ್ಯವಾದರೆ ಅದೇ ದಿನ ಸಾಯಂಕಾಲ 5.00 ಗಂಟೆಗೆ ಅಥವಾ ಇತರೆ ಅನುಕೂಲವಾದ ದಿನ ಟೆಂಡರುದಾರರು ಅಥವಾ ಅವರ ಏಜೆಂಟರುಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಸಾರ್ವಜನಿಕ ರಜವಾದರೆ ಮಾರನೆಯ ದಿನವೇ ಈ ದಿನಾಂಕದ ಬದಲು ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣ ನೀಡದೇ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.

ಟೆಂಡರ್ ಫಾರಂಗಳನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಈ ಕೆಳಗೆ ನಮೂದಿಸಲಾಗಿರುವ ದಿನಾಂಕಗಳಲ್ಲಿ ನಿಗದಿತ ಟೆಂಡರ್ ಫಾರಂಗಳ ಬೆಲೆಯನ್ನು ನೀಡಿ ಪಡೆಯಬಹುದು. ಹಾಗೂ ಟೆಂಡರ್ ಫಾರಂ ಬೆಲೆಯನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ. ನಿಗದಿಪಡಿಸಿದ ಇ.ಎಂ.ಡಿ. ಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಎಫ್.ಡಿ.ಆರ್. ಸಿ.ಡಿ.ಆರ್. ಬ್ಯಾಂಕ್ ಗ್ಯಾರಂಟಿ (ಕನಿಷ್ಟ ಒಂದು ವರ್ಷ) ರೂಪದಲ್ಲಿ ನೀಡತಕ್ಕದ್ದು. ಒಂದು ವೇಳೆ ಎನ್.ಎಸ್.ಸಿ. ಆಗಿದ್ದಲ್ಲಿ, ಕಾರ್ಯಪಾಲಕ ಅಭಿಯಂತರರವರ ಹೆಸರಿಗೆ ಪ್ಲೆಡ್ಜ್ ಮಾಡಿಸತಕ್ಕದ್ದು.

**ನಿಬಂಧನೆಗಳು**

1) ಅರ್ಜಿದಾರರು ಟೆಂಡರ್ ಕರೆದ ಕಾಮಗಾರಿಯಂತಹ ಕಾಮಗಾರಿಗಳನ್ನು ದಕ್ಷತೆಯಿಂದ ನಿರ್ವಹಿಸಿದ ಅನುಭವ ಇರಬೇಕು. ಸರ್ಕಾರಿ ಆದೇಶ ಸಂಖ್ಯೆ ನಂ: ಪಿ.ಡಬ್ಲ್ಯೂ.ಡಿ 344 ಸಿ.ಆರ್.ಎಮ್ 2000 ದಿನಾಂಕ: 15.1.2002ರ ಪ್ರಕಾರ ಈ ಕಾಮಗಾರಿಗಳಿಗೆ ನಿರ್ದಿಷ್ಟಪಡಿಸಿದ ಮೊತ್ತದ ಶೇಕಡ 30 ರಷ್ಟು ಮೊತ್ತದ ಸಮನಾದ ಕಾಮಗಾರಿಯನ್ನು ಅರ್ಜಿದಾರರು ಹಿಂದಿನ ಐದು ಆರ್ಥಿಕ ವರ್ಷಗಳ ಬ್ಲಾಕ್ ಕಾಲಾವಕಾಶದಲ್ಲಿ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಿಗಳಿಂದ ದೃಢೀಕರಣ ಪತ್ರವನ್ನು ಒದಗಿಸತಕ್ಕದ್ದು.

2) ಕ್ರಮ ಸಂಖ್ಯೆ 1 ಮತ್ತು 2ರ ಕಾಮಗಾರಿಗಳಿಗೆ ಭಾಗವಹಿಸುವ ಗುತ್ತಿಗೆದಾರರು ಕೆಲಸಕ್ಕೆ ಅವಶ್ಯಕವಾದ 40/60 TPH ಸಾಮರ್ಥ್ಯದ 1-ಹಾಟ್ ಮಿಕ್ಸ್ ಪ್ಲಾಂಟ್, 1-ಪೇವರ್, 1 ರೋಲರ್ 2 ಟಿಪ್ಪರ್, 1ಮೆಕಾನಿಕಲ್ ಸ್ಪ್ರೇಯರ್ ಹಾಗೂ ಇತರೆ ಅವಶ್ಯಕವಾದ ವಸ್ತುಗಳ ಮಾಲಿಕತ್ವ ಹೊಂದಿರಬೇಕು ಅಥವಾ ಇವುಗಳ ಮಾಲಿಕತ್ವ ಹೊಂದಿರುವವರಿಂದ ಸದರಿ ಕೆಲಸಕ್ಕೆ ಉಪಯೋಗಿಸಲು ಸಂಬಂಧಪಟ್ಟ ಮಾಲೀಕರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು. ಸ್ಥಾವರ ಹೊಂದಿರುವ ಬಗ್ಗೆ ದೃಢೀಕರಣ ಪತ್ರ ನೀಡಬೇಕು ಹಾಗೂ ಪ್ಲಾಂಟ್ ಮತ್ತು ಪೇವರನ್ನು ಪರಿವೀಕ್ಷಣೆಗೆ ಒಳಪಡಿಸತಕ್ಕದ್ದು. ಎಲ್ಲಾ ಯಂತ್ರೋಪಕರಣ ಮತ್ತು ಸಲಕರಣೆಗಳನ್ನು ಹೊಂದಿರುವ ಬಗ್ಗೆ ನೋಟರಿಯವರ ಮುಂದೆ ಪ್ರಮಾಣೀಕರಿಸಿದ ಪತ್ರಗಳನ್ನು ಲಗತ್ತಿಸತಕ್ಕದ್ದು.

3) ಕ್ರಮ ಸಂಖ್ಯೆ 3 ರಿಂದ 14ರ ಕಾಮಗಾರಿಗಳಿಗೆ ಭಾಗವಹಿಸುವ ಗುತ್ತಿಗೆದಾರರು ಕೆಲಸಕ್ಕೆ ಅವಶ್ಯಕವಾದ 6/10 TPH ಸಾಮರ್ಥ್ಯದ 1-ಮಿನಿ ಮಿಕ್ಸ್ ಪ್ಲಾಂಟ್, 1 ರೋಲರ್ 2 ಟಿಪ್ಪರ್ ಮತ್ತು 1 ಮೆಕಾನಿಕಲ್ ಸ್ಪ್ರೇಯರ್ ಹಾಗೂ ಇತರೆ ಅವಶ್ಯಕವಾದ ವಸ್ತುಗಳ ಮಾಲಿಕತ್ವ ಹೊಂದಿರಬೇಕು ಅಥವಾ ಇವುಗಳ ಮಾಲಿಕತ್ವ ಹೊಂದಿರುವವರಿಂದ ಸದರಿ ಕೆಲಸಕ್ಕೆ ಉಪಯೋಗಿಸಲು ಸಂಬಂಧಪಟ್ಟ ಮಾಲೀಕರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು. ಎಲ್ಲಾ ಯಂತ್ರೋಪಕರಣ ಮತ್ತು ಸಲಕರಣೆಗಳನ್ನು ಹೊಂದಿರುವ ಬಗ್ಗೆ ನೋಟರಿಯವರ ಮುಂದೆ ಪ್ರಮಾಣೀಕರಿಸಿದ ಪತ್ರಗಳನ್ನು ಲಗತ್ತಿಸತಕ್ಕದ್ದು.

4) ಗುತ್ತಿಗೆದಾರರು ಈ ಹಿಂದೆ ಯಾವುದೇ ಕೆಲಸಗಳನ್ನು ಪೂರ್ಣಗೊಳಿಸದೆ ಮಧ್ಯದಲ್ಲಿ ತೊರೆದಿರಬಾರದು ಹಾಗೂ ಸಕಾರಣವಿಲ್ಲದೆ ಯಾವುದೇ ಕಾಮಗಾರಿಗಳನ್ನು ವಿಳಂಬವಾಗಿ ಪೂರೈಸಿರಬಾರದು.

5) ಅರ್ಜಿದಾರರು ತಮ್ಮ ಗುತ್ತಿಗೆ ನೊಂದಣಿ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.

6) ಕಾಮಗಾರಿಗೆ ಬೇಕಾದ ಸಿಮೆಂಟ್, ಉಕ್ಕು, ಡಾಂಬರ್, ಆರ್.ಸಿ.ಸಿ. ಪೈಪುಗಳು ಇತ್ಯಾದಿ ಸಾಮಗ್ರಿಗಳನ್ನು ಐ.ಆರ್.ಸಿ. ಮತ್ತು ಐ.ಎಸ್.ಐ. ನಿರ್ದಿಷ್ಟಪಡಿಸಿದ ಕ್ರಮವಾಗಿ ವಿವರಣೆ ಮತ್ತು ಉದ್ದೇಶಗಳಿಗನುಸಾರವಾದ, ಕಾಮಗಾರಿಗೆ ಬೇಕಾಗುವ ಎಲ್ಲಾ ಸಾಮಾಗ್ರಿಗಳನ್ನು ಗುತ್ತಿಗೆದಾರರು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟದ ಬಗ್ಗೆ ದೃಢೀಕರಿಸಿದ ನಂತರ ಉಪಯೋಗಿಸತಕ್ಕದ್ದು. ಇಲಾಖೆಯಿಂದ ಯಾವುದೇ ಸಾಮಗ್ರಿಗಳನ್ನು ಸರಬರಾಜು ಮಾಡುವುದಿಲ್ಲ.

7) ಗುತ್ತಿಗೆದಾರರು ಒಂದು ವರ್ಷದವರೆಗೆ ಪೂರೈಸಿದ ಕಾಮಗಾರಿಯ ನಿರ್ವಹಣೆಯನ್ನು ಮಾಡತಕ್ಕದ್ದು.

8) ಗುತ್ತಿಗೆದಾರರು ಸದರಿ ಕಾಮಗಾರಿಯನ್ನು ನಿರ್ವಹಿಸುವ ಆರ್ಥಿಕ ಸಾಮರ್ಥ್ಯದ ಬಗ್ಗೆ ಬ್ಯಾಂಕಿನಿಂದ ಪಡೆದ ಸೂಕ್ತ ದೃಢೀಕರಣ ಪತ್ರ ಲಗತ್ತಿಸತಕ್ಕದ್ದು

9) ಗುತ್ತಿಗೆ ಪೆಟ್ಟಿಗೆಗಳನ್ನು ವೃತ್ತ ಕಛೇರಿ ಶಿವಮೊಗ್ಗ ಮತ್ತು ವಿಭಾಗ ಕಛೇರಿ ಶಿವಮೊಗ್ಗಗಳಲ್ಲಿ ಇಡಲಾಗುವುದು.

10) ಗುತ್ತಿಗೆದಾರರು ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ತೆಗೆದುಕೊಂಡು ಹೋಗುವಾಗ ತಮ್ಮ ರಿಜಿಸ್ಟ್ರೇಷನ್ ಪಾಸ್ ಬುಕ್ಕನ್ನು ಒದಗಿಸಿ ಕೆಲಸದ ವಿವರಗಳನ್ನು ದಾಖಲಿಸಿಕೊಳ್ಳತಕ್ಕದ್ದು. ಟೆಂಡರ್ ಫಾರಂಗಳನ್ನು ಅಂಚೆ ಮೂಲಕ ಕಳುಹಿಸಲಾಗುವುದಿಲ್ಲ.

ಹೆಚ್ಚಿನ ವಿವರಗಳು ಬೇಕಾದಲ್ಲಿ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು. ಸಾರ್ವಜನಿಕ ರಜವಾದರೆ ಮಾರನೆಯ ದಿನವೇ ಈ ದಿನಾಂಕದ ಬದಲು ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು.

**ಪಿ.ಆರ್. ಗಿರಿಯಪ್ಪ**

ಕಾರ್ಯಪಾಲಕ ಅಭಿಯಂತರರು, ಶಿವಮೊಗ್ಗ ವಿಭಾಗ, ಶಿವಮೊಗ್ಗ

**ಟೆಂಡರಿಗಿಟ್ಟ ಕಾಮಗಾರಿಗಳ ವಿವರ**

| ಕ್ರ. ಸಂ. | ಕಾಮಗಾರಿಯ ವಿವರ | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಇಎಂಡಿ ಮೊತ್ತ (ರೂ. ಗಳಲ್ಲಿ) | ಟೆಂಡರ್ ಫಾರಂ ಬೆಲೆ (ರೂ. ಗಳಲ್ಲಿ) | ಅರ್ಹರಾದ ಗುತ್ತಿಗೆದಾರರು | ಟೆಂಡರ್ ಕಾಮಗಾರಿಗಳನ್ನು ಪರಿಪೂರ್ಣವಾಗಿ ಮುಗಿಸಲು ನಿಗದಿಪಡಿಸಿದ ಕಾಲಾವಧಿ | ಟೆಂಡರ್ ಫಾರಂಗಳಿಗೆ ಅರ್ಜಿಯನ್ನು ಸ್ವೀಕರಿಸುವ ದಿನಾಂಕ ಸಂಜೆ 5:30ರ ವರೆಗೆ | ಖಾಲಿ ಟೆಂಡರ್ ಫಾರಂ ಕೊಡುವ ದಿನಾಂಕ ಸಂಜೆ 5:30 ರವರೆಗೆ | ಭರ್ತಿ ಮಾಡಿದ ಟೆಂಡರ್ ಫಾರಂ ಸ್ವೀಕರಿಸುವ ದಿನಾಂಕ ಸಂಜೆ 4:30 ಗಂಟೆ ವರೆಗೆ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1. | ಸೊರಬ-ಉದ್ರಿ -ತೋಗರ್ಸಿ-ರಸ್ತೆ 0.00 ರಿಂದ 4.00 ಕಿ.ಮೀ ವರೆಗೆ ರಸ್ತೆಯ ಅಭಿವೃದ್ಧಿ ಹಾಗೂ ಡಾಂಬರೀಕರಣ | 14.00 | 22500/- | 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು | 2 ತಿಂಗಳು ಮಳೆಗಾಲ ಸೇರಿ | 18.02.05 | 22.02.05 | 26.02.05 |
| 2. | ಸೊರಬ-ಉದ್ರಿ -ತೋಗರ್ಸಿ ರಸ್ತೆ 4.00 ರಿಂದ 8.00 ಕಿ.ಮೀ ವರೆಗೆ ರಸ್ತೆಯ ಅಭಿವೃದ್ಧಿ ಹಾಗೂ ಡಾಂಬರೀಕರಣ | 14.00 | 21000/- | 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು | 2 ತಿಂಗಳು ಮಳೆಗಾಲ ಸೇರಿ | 18.02.05 | 22.02.05 | 26.02.05 |
| 3. | ಸಾಗರ-ಶಿರಾಳಕೊಪ್ಪ ರಸ್ತೆಯ ಕಿ.ಮೀ. 10.200 ರಿಂದ 13.20 ವರೆಗೆ ರಸ್ತೆ ಎತ್ತರಿಸುವುದು ಹಾಗೂ ರಸ್ತೆ ಬದಿಗಳ ಅಭಿವೃದ್ಧಿ ಮತ್ತು ಡಾಂಬರೀಕರಣ | 15.00 | 22500/- | 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು | 2 ತಿಂಗಳು ಮಳೆಗಾಲ ಸೇರಿ | 18.02.05 | 22.02.05 | 26.02.05 |
| 4. | ಸಾಗರ-ಶಿರಾಳಕೊಪ್ಪ ರಸ್ತೆಯ ಕಿ.ಮೀ. 13.200 ರಿಂದ 17.00 ವರೆಗೆ ರಸ್ತೆ ಬದಿಗಳ ಅಭಿವೃದ್ಧಿ ಮತ್ತು ಡಾಂಬರೀಕರಣ | 14.00 | 21000/- | 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು | 2 ತಿಂಗಳು ಮಳೆಗಾಲ ಸೇರಿ | 18.02.05 | 22.02.05 | 26.02.05 |
| 5. | ಉಳವಿ-ಸೊರಬ ರಸ್ತೆಯ ಕಿ.ಮೀ. 0.00 ರಿಂದ 4.00 ವರೆಗೆ ರಸ್ತೆ ಬದಿಗಳ ಅಭಿವೃದ್ಧಿ ಮತ್ತು ಡಾಂಬರೀಕರಣ | 14.00 | 21000/- | 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು | 2 ತಿಂಗಳು ಮಳೆಗಾಲ ಸೇರಿ | 18.02.05 | 22.02.05 | 26.02.05 |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 6. | ಉಳವಿ-ಸೊರಬ ರಸ್ತೆಯ ಕಿ.ಮೀ 4.00 ರಿಂದ 8.00 ವರೆಗೆ ರಸ್ತೆ ಬದಿಗಳ ಅಭಿವೃದ್ಧಿ ಮತ್ತು ಡಾಂಬರೀಕರಣ | 14.00 | 21000/- | 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು | 2 ತಿಂಗಳು ಮಳೆಗಾಲ ಸೇರಿ | 18.02.05 | 22.02.05 | 26.02.05 |
| 7. | ಉಳವಿ-ಸೊರಬ ರಸ್ತೆಯ ಕಿ.ಮೀ. 8.00 ರಿಂದ 11.00 ವರೆಗೆ ರಸ್ತೆ ಬದಿಗಳ ಅಭಿವೃದ್ಧಿ ಮತ್ತು ಡಾಂಬರೀಕರಣ | 12.00 | 18000/- | 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು | 2 ತಿಂಗಳು ಮಳೆಗಾಲ ಸೇರಿ | 18.02.05 | 22.02.05 | 26.02.05 |
| 8. | ಸೊರಬ-ಶಿರಸಿ ರಸ್ತೆಯ ಕಿ.ಮೀ 0.00 ರಿಂದ 4.00 ವರೆಗೆ ರಸ್ತೆ ಬದಿಗಳ ಅಭಿವೃದ್ಧಿ ಮತ್ತು ಡಾಂಬರೀಕರಣ. | 14.00 | 21000/- | 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು | 2 ತಿಂಗಳು ಮಳೆಗಾಲ ಸೇರಿ | 18.02.05 | 22.02.05 | 26.02.05 |
| 9. | ಸೊರಬ-ಶಿರಸಿ ರಸ್ತೆಯ ಕಿ.ಮೀ 4.00 ರಿಂದ 8.00 ವರೆಗೆ ರಸ್ತೆ ಬದಿಗಳ ಅಭಿವೃದ್ಧಿ ಮತ್ತು ಡಾಂಬರೀಕರಣ. | 14.00 | 21000/- | 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು | 2 ತಿಂಗಳು ಮಳೆಗಾಲ ಸೇರಿ | 18.02.05 | 22.02.05 | 26.02.05 |
| 10. | ಸೊರಬ-ಚಂದ್ರಗುತ್ತಿ ರಸ್ತೆಯ ಕಿ.ಮೀ 0.00 ರಿಂದ 4.50 ವರೆಗೆ ರಸ್ತೆ ಬದಿಗಳ ಅಭಿವೃದ್ಧಿ ಮತ್ತು ಡಾಂಬರೀಕರಣ. | 15.00 | 22500/- | 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು | 2 ತಿಂಗಳು ಮಳೆಗಾಲ ಸೇರಿ | 18.02.05 | 22.02.05 | 26.02.05 |
| 11. | ಸೊರಬ-ಚಂದ್ರಗುತ್ತಿ ರಸ್ತೆಯ ಕಿ.ಮೀ 4.50 ರಿಂದ 9.00 ವರೆಗೆ ರಸ್ತೆ ಬದಿಗಳ ಅಭಿವೃದ್ಧಿ ಮತ್ತು ಡಾಂಬರೀಕರಣ. | 15.00 | 22500/- | 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು | 2 ತಿಂಗಳು ಮಳೆಗಾಲ ಸೇರಿ | 18.02.05 | 22.02.05 | 26.02.05 |
| 12. | ಸೊರಬ-ಚಂದ್ರಗುತ್ತಿ ರಸ್ತೆಯ ಕಿ.ಮೀ 9.00 ರಿಂದ 13.50 ವರೆಗೆ ರಸ್ತೆ ಬದಿಗಳ ಅಭಿವೃದ್ಧಿ ಮತ್ತು ಡಾಂಬರೀಕರಣ. | 15.00 | 22500/- | 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು | 2 ತಿಂಗಳು ಮಳೆಗಾಲ ಸೇರಿ | 18.02.05 | 22.02.05 | 26.02.05 |
| 13. | ಮೂಡಿ-ಜಡೆ ರಸ್ತೆಯ ಕಿ.ಮೀ 24.00 ರಿಂದ 25.00 ವರೆಗೆ ರಸ್ತೆಯನ್ನು ಎತ್ತರಿಸುವುದು. ಜಲ್ಲಿ ಬಿಚಾವಣೆ ಮಾಡುವುದು ಮತ್ತು ಡಾಂಬರೀಕರಣ. | 15.00 | 22500/- | 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು | 2 ತಿಂಗಳು ಮಳೆಗಾಲ ಸೇರಿ | 18.02.05 | 22.02.05 | 26.02.05 |
| 14. | ಮೂಡಿ-ಜಡೆ ರಸ್ತೆಯ ಕಿ.ಮೀ 22.00 ರಿಂದ 24.00 ವರೆಗೆ ಹಾಗೂ ಕಿ.ಮೀ 25.00 ರಿಂದ 27.00 ವರೆಗೆ ಮರು ಡಾಂಬರೀಕರಣ. | 15.00 | 22500/- | 2200/- | 2ನೇ ದರ್ಜೆ ಮತ್ತು ಮೇಲ್ಪಟ್ಟು | 2 ತಿಂಗಳು ಮಳೆಗಾಲ ಸೇರಿ | 18.02.05 | 22.02.05 | 26.02.05 |

**ಪಿ.ಆರ್. ಗಿರಿಯಪ್ಪ**

ಪಿ.ಆರ್. 78 ಕಾರ್ಯಪಾಲಕ ಅಭಿಯಂತರರು, ಶಿವಮೊಗ್ಗ ವಿಭಾಗ, ಶಿವಮೊಗ್ಗ

**ಕಾರ್ಯಪಾಲಕ ಅಭಿಯಂತರರ ಕಾರ್ಯಾಲಯ, ಪಿಡಬ್ಲ್ಯೂಡಿ ವಿಭಾಗ, ಚಿತ್ರದುರ್ಗ**

**ಟೆಂಡರ್ ಪ್ರಕಟಣೆ ಸಂಖ್ಯೆ:ಕಾಪಾಅ:ಲೋಇ:ಚಿ:ಜೇ-2:ಆಯವ್ಯಯ:2004-2005, ದಿನಾಂಕ: 28ನೇ ಜನವರಿ 2005**

**ದ್ವಿ ಲಕೋಟೆ ಪದ್ಧತಿ**

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಗುತ್ತಿಗೆದಾರರಿಂದ ಈ ಕೆಳಕಂಡ ಕಾಮಗಾರಿಗಳಿಗೆ ಐಟಂವಾರು ಟೆಂಡರ್‌ಗಳನ್ನು ದ್ವಿಲಕೋಟೆ ಪದ್ಧತಿಯಲ್ಲಿ ದ್ವಿಪ್ರತಿಗಳಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ - 2000 ಮತ್ತು ಆ್ಯಕ್ಟ್ -2000ರ ಪ್ರಕಾರ ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ಆಹ್ವಾನಿಸಲಾಗಿದೆ.

ಕಾಮಗಾರಿಯ ಟೆಂಡರ್ 2 ಲಕೋಟೆಗಳನ್ನು ಅಂದರೆ 1) ತಾಂತ್ರಿಕ ಬಿಡ್ ಮತ್ತು 2) ಆರ್ಥಿಕ ಬಿಡ್‌ಗಳನ್ನು ಒಳಗೊಂಡಿರುತ್ತದೆ.

1) ಗುತ್ತಿಗೆದಾರರು ತಾಂತ್ರಿಕ ಬಿಡ್‌ನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಅವಶ್ಯಕ ದೃಢೀಕೃತ ದಾಖಲಾತಿಗಳನ್ನು ಲಗತ್ತಿಸಿ ಲಕೋಟೆಯಲ್ಲಿ ಮೊಹರು ಮಾಡಿ ಲಕೋಟೆಯ ಮೇಲೆ ತಾಂತ್ರಿಕ ಬಿಡ್ ಎಂದು ನಮೂದಿಸಿ ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.
2) ಗುತ್ತಿಗೆದಾರರು ಆರ್ಥಿಕ ಬಿಡ್‌ನ್ನು ದ್ವಿಪತ್ರಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಷೆಡ್ಯೂಲ್ 'ಬಿ' ನಲ್ಲಿ ದರಗಳನ್ನು ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಲಕೋಟೆಯಲ್ಲಿ ಮೊಹರು ಮಾಡಿ ಲಕೋಟೆಯ ಮೇಲೆ ಆರ್ಥಿಕ ಬಿಡ್ ಎಂದು ನಮೂದಿಸಿ ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರು ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

ಮೇಲ್ಕಂಡ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎರಡನ್ನೂ ಇನ್ನೊಂದು ಲಕೋಟೆಯಲ್ಲಿ ಹಾಕಿ ಕಾಮಗಾರಿಯ ಹೆಸರು ಹಾಗೂ ಗುತ್ತಿಗೆದಾರರ ಪೂರ್ಣ ವಿಳಾಸ ನಮೂದಿಸಿ ಮೊಹರು ಮಾಡಿರುವ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದವರಿಂದ ಏಕಕಾಲಕ್ಕೆ ಅಧೀಕ್ಷಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವೃತ್ತ, ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಮತ್ತು ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ವಿಭಾಗ, ಚಿತ್ರದುರ್ಗ ಇವರ ಕಾರ್ಯಾಲಯದಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿಗಳ ಎದುರು ಸೂಚಿಸಿರುವ ದಿನಾಂಕಗಳಂದು ಸಾಯಂಕಾಲ 4-00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದವರಿಂದ ನಮೂದಿಸಿರುವ ದಿನಾಂಕದಂದು ಅಥವಾ ಇತರೆ ಅನುಕೂಲಕರವಾದ ದಿನಾಂಕದಂದು ಟೆಂಡರುದಾರರ ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಕೆಳಗೆ ನಮೂದಿಸಿರುವ ದಿನಾಂಕಗಳು ಸಾರ್ವಜನಿಕ ರಜಾ ದಿನವಾದರೆ ಮಾರನೆಯ ಕೆಲಸದ ದಿನವೇ ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು.

ತಾಂತ್ರಿಕ ಬಿಡ್‌ನ್ನು ಮೊದಲು ತೆರೆಯಲಾಗುವುದು. ಗುತ್ತಿಗೆದಾರರು ಇದರಲ್ಲಿ ಒದಗಿಸಲಾದ ವಿವರಗಳನ್ನು ಪರಿಶೀಲಿಸಲಾಗುವುದು. ತೃಪ್ತಿಕರವಾದ ವಿವರಗಳನ್ನು ಸಲ್ಲಿಸಿದ ಗುತ್ತಿಗೆದಾರರ ತಾಂತ್ರಿಕ ಬಿಡ್‌ಗಳನ್ನು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಯಾದ ನಂತರ ಅರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ತೆರೆಯಲಾಗುವುದು. ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕವನ್ನು ಅರ್ಹ ಗುತ್ತಿಗೆದಾರರಿಗೆ ತಿಳಿಸಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅನರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್ ತೆರೆಯಲಾಗುವುದಿಲ್ಲ. ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗೆ ಇಟ್ಟಿರುವ ಹಣ ರೂ. ಲಕ್ಷಗಳಲ್ಲಿ | ಮುಂಗಡ ಠೇವಣಿ ಹಣ ರೂ.ಗಳಲ್ಲಿ | ಟೆಂಡರು ಫಾರಂಗಳ ಬೆಲೆ ರೂ. | ಗುತ್ತಿಗೆದಾರರ ದರ್ಜೆ | ಕಾಮಗಾರಿಯನ್ನು ಪೂರ್ಣಗೊಳಿಸಲು ನಿಗದಿಪಡಿಸಿರುವ ಅವಧಿ ಮಳೆಗಾಲ ಸೇರಿ | ಕೊನೆಯ ದಿನಾಂಕ | | | ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ |
|---|---|---|---|---|---|---|---|---|---|---|
| | | | | | | | ಅರ್ಜಿಗಳನ್ನು ಸ್ವೀಕರಿಸಲು ಸಂಜೆ 5-30 ಗಂಟೆಯವರೆಗೆ | ಟೆಂಡರು ಡಾಕ್ಯುಮೆಂಟ್‌ಗಳನ್ನು ನೀಡಲು ಸಂಜೆ 5-30 ಗಂಟೆಯವರೆಗೆ | ಟೆಂಡರುಗಳನ್ನು ಸ್ವೀಕರಿಸಲು ಸಂಜೆ 4-00 ಗಂಟೆಯವರೆಗೆ | |
| 1 | ಚಿತ್ರದುರ್ಗದಲ್ಲಿ ಜಿಲ್ಲಾ ತರಬೇತಿ ಸಂಸ್ಥೆ ಕಟ್ಟಡ ನಿರ್ಮಾಣ | 96.00 | 96000-00 | 10000-00 + ತೆರಿಗೆ | ಒಂದನೇ ದರ್ಜೆ | 12 (ಹನ್ನೆರಡು ತಿಂಗಳು) | 10.2.2005 | 17.2.2005 ರಿಂದ 19.2.2005 | 21.2.2005 | 24.2.2005 |

**ನಿಬಂಧನೆಗಳು:**

1) ಕಾಮಗಾರಿಗೆ ಅವಶ್ಯಕವಿರುವ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಮತ್ತು ಇಲಾಖಾವತಿಯಿಂದ ಯಾವುದೇ ಸಾಮಗ್ರಿಗಳನ್ನು ನೀಡಲಾಗುವುದಿಲ್ಲ.
2) ಖಾಲಿ ಟೆಂಡರ್ ಫಾರಂ ವಿತರಿಸುವಾಗ ಗುತ್ತಿಗೆದಾರರ ನೊಂದಣಿ ಪುಸ್ತಕವನ್ನು ಕಡ್ಡಾಯವಾಗಿ ಹಾಜರುಪಡಿಸಿ ಅದರಲ್ಲಿ ಕಾಮಗಾರಿಗಳ ವಿವರಗಳನ್ನು ದಾಖಲಿಸಿಕೊಳ್ಳತಕ್ಕದ್ದು.
3) ಸತತವಾಗಿ 3 ಬಾರಿ ಖಾಲಿ ಟೆಂಡರ್ ಫಾರಂ ಖರೀದಿಸಿ ಟೆಂಡರ್ ಹಾಕದೇ ಇರುವ ಗುತ್ತಿಗೆದಾರರು ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
4) ಕಾಮಗಾರಿಯನ್ನು ಉಪಗುತ್ತಿಗೆ ನೀಡುವುದನ್ನು ನಿಷೇಧಿಸಲಾಗಿದೆ.
5) ಗುತ್ತಿಗೆದಾರರು ಕಾರ್ಯಾದೇಶ ಪತ್ರ ಸ್ವೀಕರಿಸಿದ ಒಂದು ವಾರದೊಳಗೆ ಗುತ್ತಿಗೆ ಕರಾರು ಮಾಡಿಕೊಳ್ಳದಿದ್ದಲ್ಲಿ ಅಥವಾ ಗುತ್ತಿಗೆ ಕರಾರನ್ನು ಮಾಡಿಕೊಂಡ ನಂತರ ಒಂದು ವಾರದೊಳಗೆ ಕಾಮಗಾರಿಯನ್ನು ಪ್ರಾರಂಭಿಸದಿದ್ದಲ್ಲಿ ಹೊಣೆ ಮತ್ತು ಜವಾಬ್ದಾರಿ ಮೇಲೆ ಗುತ್ತಿಗೆಯನ್ನು ರದ್ದುಪಡಿಸಿ ಇ.ಎಂ.ಡಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
6) ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೆ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಲೋಕೋಪಯೋಗಿ ಇಲಾಖೆಗೆ ಸಂಬಂಧಿಸಿದ ಅಧಿಕಾರಿಗಳು ಕಾಯ್ದಿರಿಸಿಕೊಂಡಿರುತ್ತಾರೆ.
7) ಗುತ್ತಿಗೆದಾರರು ನಿರ್ವಹಿಸಿದ ಕಾಮಗಾರಿಯನ್ನು ಒಂದು ವರ್ಷದವರೆಗೂ ಅವರ ವೆಚ್ಚದಲ್ಲಿ ಸುಸ್ಥಿತಿಯಲ್ಲಿ ಕಾಪಾಡತಕ್ಕದ್ದು.
8) ಗುತ್ತಿಗೆದಾರರು ಟೆಂಡರ್ ಫಾರಂನಲ್ಲಿ ಎಲ್ಲಾ ಪುಟಗಳನ್ನು ಸರಿಯಾಗಿ ತುಂಬಿ ಸಹಿ ಮಾಡಿ ಸಲ್ಲಿಸತಕ್ಕದ್ದು ಮತ್ತು ಗುತ್ತಿಗೆದಾರರು ಇಲಾಖಾ ನಿಯಮಗಳಿಗೆ ಬದ್ಧರಾಗಿರಬೇಕು.
9) ಗುತ್ತಿಗೆದಾರರು ಹಿಂದಿನ ಐದು ವರ್ಷಗಳಲ್ಲಿ ಒಂದು ಆರ್ಥಿಕ ವರ್ಷದಲ್ಲಿ ಮೇಲ್ಕಂಡ ಕಾಮಗಾರಿಗಳಲ್ಲಿ ತೆಗೆದುಕೊಳ್ಳಲು ಉದ್ದೇಶಿಸಿದ ಕಾಮಗಾರಿಗಳ ಒಟ್ಟು ಮೊತ್ತದ ಶೇಕಡ 30ಕ್ಕೆ ಕಡಿಮೆ ಇಲ್ಲದಂತೆ ಅದೇ ತರಹದ ಒಂದು ಕಾಮಗಾರಿಯನ್ನು ನಿರ್ವಹಿಸಿರುವ ಅನುಭವವುಳ್ಳವರಾಗಿರಬೇಕು.
10) ಗುತ್ತಿಗೆದಾರರು ಈ ಹಿಂದೆ ಯಾವುದೇ ಕಾಮಗಾರಿಯನ್ನು ಪೂರ್ಣಗೊಳಿಸದೇ ಮಧ್ಯದಲ್ಲಿ ತೊರೆದಿರಬಾರದು, ಹಾಗೂ ಸಕಾರಣವಿಲ್ಲದೇ ಯಾವುದೇ ಕಾಮಗಾರಿಯನ್ನು ವಿಳಂಬವಾಗಿ ಪೂರೈಸಿರಬಾರದು.
11) ಗುತ್ತಿಗೆದಾರರು ಕಟ್ಟಡ ಕಾಮಗಾರಿಗೆ ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವ ಹೊಂದಿರಬೇಕು. ಈ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದ ಸೂಕ್ತ ದಾಖಲಾತಿಗಳನ್ನು ಅಂದರೆ ಸೇಲ್ ಡೀಡ್, ನೊಂದಣಿ ಪ್ರಮಾಣ ಪತ್ರ, ಡೆಲಿವರಿ ಇನ್‌ವಾಯ್ಸ್ ಇತ್ಯಾದಿಗಳನ್ನು **ತಾಂತ್ರಿಕ ಬಿಡ್‌ನೊಂದಿಗೆ** ಲಗತ್ತಿಸತಕ್ಕದ್ದು.

1. 5 ಅಶ್ವಶಕ್ತಿಯ ಡೀಸೆಲ್ ಇಂಜಿನ್ ಸಹಿತವಾಗಿ ಕಾಂಕ್ರೀಟ್ ಮಿಶ್ರಣ ಯಂತ್ರ - 2 ನಂ.
2. ನೀಡಲ್ ವೈಬ್ರೇಟರ್ಸ್ - 4 ನಂ.
3. ಉಕ್ಕಿನ ಅಥವಾ ಮರದ ಹಲಗೆಯ ಸೆಂಟರಿಂಗ್ ಸಾಮಗ್ರಿಗಳು - 150 ಚದುರ ಮೀಟರ್.

**ಸೂಚನೆ:** 1) ಗುತ್ತಿಗೆದಾರರು ಸದರಿ ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳನ್ನು ನೋಟರಿ ಅಥವಾ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಿಸಿದ ದಾಖಲಾತಿ ಪ್ರತಿಗಳನ್ನು ಟೆಂಡರ್‌ನೊಂದಿಗೆ ಲಗತ್ತಿಸತಕ್ಕದ್ದು. ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳ ಮೂಲ ಪ್ರತಿಗಳನ್ನು ಗುತ್ತಿಗೆದಾರರು ಟೆಂಡರ್ ತೆರೆಯುವ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

2) ತಾಂತ್ರಿಕ ಬಿಡ್‌ನಲ್ಲಿ ವಿವರಗಳನ್ನು ನಮೂದಿಸಲು ಸ್ಥಳಾವಕಾಶ ಕಡಿಮೆಯಾದಲ್ಲಿ ಹೆಚ್ಚುವರಿ ಪುಟಗಳನ್ನು ಬಳಸಬಹುದಾಗಿದೆ.

12) ಗುತ್ತಿಗೆದಾರರು **ಅರ್ಜಿಯೊಂದಿಗೆ** ಈ ಕೆಳಕಂಡ ದಾಖಲಾತಿಗಳನ್ನು ಕಾರ್ಯಪಾಲಕ ಅಭಿಯಂತರವರಿಗೆ ಸಲ್ಲಿಸತಕ್ಕದ್ದು. ಈ ಕೆಳಕಂಡ ಅವಶ್ಯಕ ದಾಖಲೆಗಳನ್ನು ಒದಗಿಸಿದ ಗುತ್ತಿಗೆದಾರರಿಗೆ ಮಾತ್ರ ಟೆಂಡರ್ ಷೆಡ್ಯೂಲ್‌ನ್ನು ನೀಡಲಾಗುವುದು. ಈ ಅವಶ್ಯಕ ದಾಖಲೆಗಳನ್ನು ತೃಪ್ತಿಕರವಾಗಿ ನೀಡದೇ ಇರುವಂತಹ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

1) ಗುತ್ತಿಗೆದಾರರು ಅರ್ಜಿಯೊಂದಿಗೆ ಟೆಂಡರ್ ಫಾರಂ ಶುಲ್ಕವನ್ನು (ಹಿಂದಿರುಗಿಸಲಾರದಂಥದ್ದು) ಪಾವತಿಸತಕ್ಕದ್ದು ಮತ್ತು ಗುತ್ತಿಗೆದಾರರ ನೊಂದಣಿ ಪ್ರಮಾಣ ಪತ್ರದ ಪ್ರತಿ ಲಗತ್ತಿಸತಕ್ಕದ್ದು.

2) ಅರ್ಜಿಯ ಜೊತೆಯಲ್ಲಿ ಮುಂಗಡ ಹಣ ಠೇವಣಿ (ಇ.ಎಂ.ಡಿ.) ಯನ್ನು ಷೆಡ್ಯೂಲ್ಡ್ ಬ್ಯಾಂಕ್‌ನ ಡಿಮ್ಯಾಂಡ್ ಡ್ರಾಫ್ಟ್ / ಡಿಪಾಜಿಟ್ ಕಾಲ್ ರಿಸೀಪ್ಟ್ : ಬ್ಯಾಂಕ್ ಗ್ಯಾರಂಟಿ ಅಥವಾ ಕಾರ್ಯಪಾಲಕ ಅಭಿಯಂತರರು, ಪಿಡಬ್ಲ್ಯೂಡಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಿದ ರಾಷ್ಟ್ರೀಯ ಉಳಿತಾಯ ಪತ್ರಗಳ ರೂಪದಲ್ಲಿ ಸಲ್ಲಿಸಬೇಕು. ಹಾಗೂ ಇದರ ವ್ಯಾಲಿಡಿಟಿ ಅವಧಿ ಟೆಂಡರ್ ತೆರೆದ ದಿನಾಂಕದಿಂದ 90 ದಿನಗಳ ಅವಧಿ ಒಳಗೊಂಡಿದ್ದು ಠೇವಣಿ ಕ್ರಮಬದ್ಧತೆ ಅದೇ ಅವಧಿಗೆ ಬೇಕಾಗಿರುತ್ತದೆ.

3) ಗುತ್ತಿಗೆದಾರರು ಹಿಂದಿನ ಸಾಲಿನ ಮಾರಾಟ ತೆರಿಗೆ ನೊಂದಣಿ ಪ್ರಮಾಣ ಪತ್ರ ಮತ್ತು ತೀರುವಳಿ ಪ್ರಮಾಣ ಪತ್ರವನ್ನು ಸಂಬಂಧಿಸಿದ ಇಲಾಖೆಯಿಂದ ಪಡೆದು ಲಗತ್ತಿಸಬೇಕು.

ಹೆಚ್ಚಿನ ವಿವರಗಳಿಗೆ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯನ್ನು, ಕಛೇರಿ ಕೆಲಸದ ಸಮಯದಲ್ಲಿ ಸಂಪರ್ಕಿಸಬಹುದು.

ಪಿ.ಆರ್. 77 ಕಾರ್ಯಪಾಲಕ ಅಭಿಯಂತರರು, ಪಿಡಬ್ಲ್ಯೂಡಿ ವಿಭಾಗ, ಚಿತ್ರದುರ್ಗ

**OFFICE OF THE EXECUTIVE ENGINEER, NATIONAL HIGHWAY DIVISION, CHITRADURGA**
**PREQUALIFICATION CUM TENDER NOTIFICATION**
**(Two cover Bid System)**
**No.ENH/CTA/AE-1/Hagari Toll Tender/04-05/4033, Dated: 5th February 2005**

Sealed tender in duplicate for collection of "Toll" from the Vehicles are invited from the registered PWD Class-I Contractors,/ Firms,/persons having such experience in work detailed in the Table below Under Two cover BID System as per Karnataka Transparency in Public procurement Act 2000. Two cover bid system of tendering consisting of "Technical Bid" and "Financial Bid". BIDS will be received in Two parts in two different sealed covers marked as "TECHNICAL BID" and "FINANCIAL BID". These two covers shall be sealed and kept in another sealed cover duly superscribing name of work and shall addressed to the undersigned with name and full address of the bidder. Completed Bids will be received in the office of the Executive Engineer, National Highway Division, Chitradurga, and Superintending Engineer, National Highway Circle, Bangalore on behalf of Government of Karnataka up to 4.00 PM IST on the date noted against the work subject to the condition laid down in the tender documents. The tender will be opened on the same day if possible.

The tender documents can be had from both the offices on application with cost of tender forms (Non-Refundable) on the dates noted against work.

The tenders will be, as per the rule of Karnataka Transparency in Public procurement ordinance 2000 vide G.O. No. PWD/154FC-III/2000, Dated: 24.10.2000.

**I. Technical Bid:-** It should contains the following information in the sealed cover.

1. Experience and past performance in the execution of Similar Contracts.
2. All the documents should be submitted duly attested/Certified from an officer not below the rank of Executive Engineer, regarding the capability and financial status and capacity.
3. Prescribed EMD Details.
4. Past experience and work certificate for having completed similar nature of works.
5. Any other Technical details pertaining to this work.

**II. Financial Bid:-** It should contain the following information in the sealed cover.

This contains the tender norms and the prices quoted by the tenderer on Schedule "B" in duplicate.

Technical bid will be opened first. The financial bid of those whose technical bid is qualified will be opened. Further particulars required if any, can be had from the office of the Executive Engineer, National Highway Division, Chitradurga, during office hours. Further if any one of the dates noted below happens to be general holiday the next day will hold good. The National Saving Certificate furnished towards EMD should be pledged in favour of Executive Engineer, National Highway Division, Chitradurga, and submitted with tender, otherwise the tender is liable to be rejected.

| Sl. No. | Name of Work | Offset value put to tender in Lakhs. | EMD to be furnished along with the tender. Rs. In Lakhs. | In case of person/Firm not registered in PWD experience certificate in similar work issued by the Executive Engineer, concerned and solvency issued by the Nationalized bank to be furnished with the application for issue of tender forms. | Cost of Tender documents to be furnished in the form of D.D. Cash | Class of Registration for registered contractors | Period fixed for collection of Toll |
|---|---|---|---|---|---|---|---|
| 1. | Right of collect Toll fee for the Bridge across Hagari river near Paramadevana-halli in Bellary Taluk at KM 358 on N.H. 63. | 431.00 | 4.31 in favour of Executive Engineer, National Highway Division, Chitradurga, in the form of DD/Recurring deposit at call receipt of Schedule Bank | 35.92 lakhs | Rs.40,000/- +9% KST + 15% SC on KST | Class-I Contractor Person/Firms /having such experience | From 1.4.2005 (0.00Hrs) up to 31.3.2008 (24Hrs) 1096 days |

**Schedule of Dates is as under:**

| Last date of receipt of application for tender forms | Date of issue of Tender forms | Date of receipt of Sealed Tender forms | Opening of Technical Bid. | Opening of Financial Bid.of Technically qualified Tender |
|---|---|---|---|---|
| 18.2.2005 (During office Hours) | 24.2.2005 and 25.2.2005 (During office Hours) | 28.2.2005 (upto 4.00 PM) | 28.02.2005 at 5 P.M. or any other date and time to be intimated in due course. | 9.3.2005 at 5 P.M. or any other date and time to be intimated in due course. |

P.R. 80 Executive Engineer, National Highway Division, Chitradurga

**ಜಿಲ್ಲಾ ಆರೋಗ್ಯ ಮತ್ತು ಕು.ಕ ಅಧಿಕಾರಿಗಳ ಕಛೇರಿ, ದಾವಣಗೆರೆ ಜಿಲ್ಲಾ ಪಂಚಾಯತ್, ದಾವಣಗೆರೆ**

**2005-06ನೇ ಸಾಲಿನ ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಸಂಖ್ಯೆ: ಜಿಆದಾ: ಲೆಕ್ಕ ಪತ್ರ:ಆಹಾರ:ಟೆಂಡರ್:05:04-05, ದಿನಾಂಕ: 19ನೇ ಜನವರಿ 2005**

**ವಿಷಯ:** ದಾವಣಗೆರೆ ಜಿಲ್ಲೆಯ ತಾಲ್ಲೂಕು ಮಟ್ಟದ ಸಾರ್ವಜನಿಕ ಆಸ್ಪತ್ರೆಗಳಿಗೆ 2005-06ನೇ ಸಾಲಿಗೆ ಆಹಾರ ಪದಾರ್ಥಗಳು ಮತ್ತು ಬ್ರೆಡ್ ಸರಬರಾಜು ಮಾಡಲು ಟೆಂಡರ್ ಕರೆಯುವ ಬಗ್ಗೆ.

**ಉಲ್ಲೇಖ:** ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ದಾವಣಗೆರೆ ಜಿಲ್ಲಾ ಪಂಚಾಯತ್, ದಾವಣಗೆರೆ ಇವರ ಅನುಮತಿ ಪತ್ರ ಸಂಖ್ಯೆ:ಜಿಪಂದಾ:ಅ(3):ಸಿಆರ್-135:04-05, ದಿನಾಂಕ:28.12.2004.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ದಾವಣಗೆರೆ ಜಿಲ್ಲಾ ಪಂಚಾಯತ್, ದಾವಣಗೆರೆ ಇವರು ಉಲ್ಲೇಖಿತ ಪತ್ರದಲ್ಲಿ ನೀಡಿರುವ ಆದೇಶಕ್ಕನುಸಾರವಾಗಿ 2005-06ನೇ ಸಾಲಿಗೆ ಈ ಜಿಲ್ಲೆಯ ಈ ಕೆಳಕಂಡ ತಾಲ್ಲೂಕು ಮಟ್ಟದ ಸಾರ್ವಜನಿಕ ಆಸ್ಪತ್ರೆಗಳಿಗೆ ಆಹಾರ ಪದಾರ್ಥಗಳು ಮತ್ತು ಪ್ರಥಮ ದರ್ಜೆ ಬ್ರೆಡ್ ಸರಬರಾಜಿಗಾಗಿ ಸಾರ್ವಜನಿಕರಿಂದ ಟೆಂಡರ್ ಆಹ್ವಾನಿಸಲಾಗಿದೆ. ಅರ್ಜಿಗಳನ್ನು ದಿನಾಂಕ:20.1.2005 ರಿಂದ 24.02.2005 ರವರೆಗೆ ಕಚೇರಿ ವೇಳೆಯಲ್ಲಿ ಈ ಕಚೇರಿಯಲ್ಲಿ ಪಡೆಯಬಹುದಾಗಿದ್ದು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ದಾವಣಗೆರೆ ಇವರಿಗೆ ದಿನಾಂಕ: 26.02.2005 ರಂದು ಬೆಳಿಗ್ಗೆ 11.30 ಗಂಟೆಯೊಳಗೆ ನಿಗದಿತ ನಮೂನೆಯಲ್ಲಿ ಮುದ್ರಿತವಾದ ಫಾರಂಗಳಲ್ಲಿ ಪ್ರತಿಯೊಂದು ಐಟಂಗೆ ನಾಲ್ಕು ಪ್ರತಿಗಳಲ್ಲಿ ಮೊಹರಾದ ಟೆಂಡರ್‌ನ್ನು ಸಲ್ಲಿಸತಕ್ಕದ್ದು.

| ಕ್ರ. ಸಂ. | ಸರಬರಾಜು ಮಾಡಬೇಕಾದ ಪದಾರ್ಥಗಳು | ತಾಲ್ಲೂಕು ಮಟ್ಟದ ಸಾರ್ವಜನಿಕ ಆಸ್ಪತ್ರೆ | | | | |
|---|---|---|---|---|---|---|
| | | ಹರಿಹರ | ಜಗಳೂರು | ಹರಪನಹಳ್ಳಿ | ಚನ್ನಗಿರಿ | ಹೊನ್ನಾಳಿ |
| | | ಇಎಂಡಿ | ಇಎಂಡಿ | ಇ.ಎಂ.ಡಿ | ಇ.ಎಂ.ಡಿ | ಇ.ಎಂ.ಡಿ |
| 1. | ಆಹಾರ ಪದಾರ್ಥಗಳು (ಅಕ್ಕಿ ಸಕ್ಕರೆ, ಮೀನು ಮಾಂಸ, ಎಣ್ಣೆ ಹೊರತುಪಡಿಸಿ) | ಟೆಂಡರ್‌ನ ಒಟ್ಟು ಮೊತ್ತದ ಶೇಕಡ 05 ರಷ್ಟು | ಟೆಂಡರ್‌ನ ಒಟ್ಟು ಮೊತ್ತದ ಶೇಕಡ 05 ರಷ್ಟು | ಟೆಂಡರ್‌ನ ಒಟ್ಟು ಮೊತ್ತದ ಶೇಕಡ 05 ರಷ್ಟು | ಟೆಂಡರ್‌ನ ಒಟ್ಟು ಮೊತ್ತದ ಶೇಕಡ 05 ರಷ್ಟು | ಟೆಂಡರ್‌ನ ಒಟ್ಟು ಮೊತ್ತದ ಶೇಕಡ 05 ರಷ್ಟು |
| 2. | ಬ್ರೆಡ್-ಪ್ರಥಮ ದರ್ಜೆ (ಸಮವಾಗಿ ಹೋಳು ಮಾಡಿದ ಪ್ಲಾಸ್ಟಿಕ್ ಕವರ್ ಮಾಡಿದ) | ಟೆಂಡರ್‌ನ ಒಟ್ಟು ಮೊತ್ತದ ಶೇಕಡ 05 ರಷ್ಟು | ಟೆಂಡರ್‌ನ ಒಟ್ಟು ಮೊತ್ತದ ಶೇಕಡ 05 ರಷ್ಟು | ಟೆಂಡರ್‌ನ ಒಟ್ಟು ಮೊತ್ತದ ಶೇಕಡ 05 ರಷ್ಟು | ಟೆಂಡರ್‌ನ ಒಟ್ಟು ಮೊತ್ತದ ಶೇಕಡ 05 ರಷ್ಟು | ಟೆಂಡರ್‌ನ ಒಟ್ಟು ಮೊತ್ತದ ಶೇಕಡ 05 ರಷ್ಟು |
| ಜಿಲ್ಲಾ ಆರೋಗ್ಯ ಮತ್ತು ಕು.ಕ ಅಧಿಕಾರಿಗಳ ಕಚೇರಿ, ದಾವಣಗೆರೆ ಇಲ್ಲಿ ಈ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳ ಮತ್ತು ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 26.2.2005 ರಂದು ಮಧ್ಯಾಹ್ನ 12.00 ಗಂಟೆಗೆ ಟೆಂಡರ್ ಅರ್ಜಿಗಳನ್ನು ತೆರೆಯಲಾಗುವುದು. | | | | | | |

ಇಚ್ಛೆಯುಳ್ಳ ಟೆಂಡರ್‌ದಾರರು ಮುದ್ರಿತ ಟೆಂಡರ್ ಫಾರಂಗಳನ್ನು ಕಛೇರಿ ಕೆಲಸದ ವೇಳೆಯಲ್ಲಿ (ಭಾನುವಾರ ಮತ್ತು ಸಾರ್ವತ್ರಿಕ ರಜಾದಿನ ಹೊರತುಪಡಿಸಿ) ಒಂದು ಫಾರಂಗೆ ರೂ.5.00 ರಂತೆ (ರೂ.ಐದು ಮಾತ್ರ) ನಾಲ್ಕು ಪ್ರತಿಗಳಿಗೆ ರೂ.20.00 (ರೂ.ಇಪ್ಪತ್ತು ಮಾತ್ರ)ಗಳನ್ನು ನಗದು ಪಾವತಿ ಮಾಡುವುದರೊಂದಿಗೆ ಪಡೆಯಬಹುದಾಗಿದೆ. ಪ್ರತಿಯೊಂದು ಆಸ್ಪತ್ರೆಗೂ ಪ್ರತಿಯೊಂದು ಐಟಂಗಳಿಗೂ ಲಕೋಟೆಯ ಮೇಲೆ ಆಹಾರ ಪದಾರ್ಥಗಳ ಸರಬರಾಜಿಗಾಗಿ ಅಥವಾ ಪ್ರಥಮ ದರ್ಜೆ ಬ್ರೆಡ್ ಸರಬರಾಜಿಗಾಗಿ ಎಂದು ನಮೂದಿಸುವುದು. ಟೆಂಡರ್ ಲಕೋಟೆಯನ್ನು ಜಿಲ್ಲಾ ಆರೋಗ್ಯ ಮತ್ತು ಕು.ಕ ಅಧಿಕಾರಿಗಳು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ವಿಳಾಸಕ್ಕೆ ಸಲ್ಲಿಸುವುದು. ಸದರಿ ಲಕೋಟೆಗಳು ಟೆಂಡರ್ ಷರತ್ತುಗಳಲ್ಲಿರುವಂತೆ ದಾಖಲಾತಿ ಪ್ರತಿಗಳನ್ನು ಒಂದು ಕವರಿನಲ್ಲಿಟ್ಟು (ಕವರ್ ನಂ.1 ಎಂದು ನಮೂದಿಸುವುದು) ಮತ್ತು ಟೆಂಡರ್ ದರಪಟ್ಟಿ ಮತ್ತು ಇಎಂಡಿ ಡಿ.ಡಿ ಯನ್ನು ಇನ್ನೊಂದು ಕವರಿನಲ್ಲಿಟ್ಟು (ಕವರ್ ನಂ.2 ಎಂದು ನಮೂದಿಸುವುದು) ಈ ಎರಡು ಕವರುಗಳ ಮೇಲೆ ವಿಳಾಸಗಳನ್ನು ಬರೆದು ಎರಡು ಕವರುಗಳನ್ನು ಒಂದೇ ಕವರಿನಲ್ಲಿಟ್ಟು ಕವರಿನ ಮೇಲೆ ಯಾವ ತಾಲ್ಲೂಕಿಗೆ ಯಾವ ಐಟಂಗೆ ಸಂಬಂಧಪಟ್ಟಿದೆ ಎಂಬುದನ್ನು ಸ್ಪಷ್ಟವಾಗಿ ನಮೂದಿಸಬೇಕು. ಟೆಂಡರ್‌ಗೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳನ್ನು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಛೇರಿ, ದಾವಣಗೆರೆ ಇವರಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.

**ಟೆಂಡರ್‌ನೊಂದಿಗೆ ಸಲ್ಲಿಸಬೇಕಾದ ದಾಖಲಾತಿಗಳು ಹಾಗೂ ನಿಬಂಧನೆಗಳು**

1) ಟೆಂಡರ್ ಮೊತ್ತದ ಶೇಕಡ 5 ರಷ್ಟು ಮೊತ್ತವನ್ನು ಮುಂಗಡ ಠೇವಣಿ ಹಣವನ್ನಾಗಿ ಜಿಲ್ಲಾ ಆರೋಗ್ಯ ಮತ್ತು ಕು.ಕ. ಅಧಿಕಾರಿಗಳು ದಾವಣಗೆರೆ ಇವರ ಹೆಸರಿಗೆ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಪಡೆದಿರುವ ಡಿಡಿ ಅಥವಾ ಖಜಾನೆಯಲ್ಲಿ ಹಣ ಪಾವತಿಸಿದ ಮೂಲ ಚಲನನ್ನು ಲಗತ್ತಿಸಬೇಕು.
2) ಟೆಂಡರ್ ಸಲ್ಲಿಸುವ ದಿನಾಂಕಕ್ಕೆ 03 ತಿಂಗಳೊಳಗಿನ ಟೆಂಡರ್ ಮೊತ್ತದ ಶೇಕಡ 25 ರಷ್ಟು ಸಾಲತೀರಿಸಿಕೊಳ್ಳುವ ರೆವಿನ್ಯೂ ಅಧಿಕಾರಿಗಳಿಂದ ಅಥವಾ ಸ್ಥಳೀಯ ಪ್ರಾಧಿಕಾರದಿಂದ ಪಡೆದಿರುವ ಯೋಗ್ಯತಾಪತ್ರವನ್ನು ಲಗತ್ತಿಸಬೇಕು. ಹಾಗೂ ಸಹಕಾರ ಸಂಸ್ಥೆಗಳ ರಿಜಿಸ್ಟ್ರಾರ್‌ರವರಿಂದ ಪಡೆದಿರುವ ಉತ್ತಮ ಆರ್ಥಿಕ ಸ್ಥಿತಿಯ ಪ್ರಮಾಣಪತ್ರವನ್ನು ಸಲ್ಲಿಸತಕ್ಕದ್ದು.
3) ಟೆಂಡರ್‌ದಾರರು ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆ ಕಟ್ಟಿದ್ದಕ್ಕೆ ನಿಗದಿತ ನಮೂನೆಯಲ್ಲಿ ಕ್ಲಿಯರೆನ್ಸ್ ಸರ್ಟಿಫಿಕೇಟ್‌ನ್ನು ಮಾರಾಟ ತೆರಿಗೆ ಅಧಿಕಾರಿಗಳಿಂದ ಪಡೆದು ಹಿಂದಿನ ಮೂರು (3) ವರ್ಷದ ಅಡಿಟ್ ವರದಿಯ ಸಹಿತ ಟೆಂಡರ್‌ನೊಂದಿಗೆ ಕಡ್ಡಾಯವಾಗಿ ಲಗತ್ತಿಸಬೇಕು.
4) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧಿನಿಯಮ 1999ರ ನಿಯಮಗಳಿಗೆ ಟೆಂಡರ್‌ದಾರರು ಬದ್ಧರಾಗಿರಬೇಕು.
5) ಯಶಸ್ವಿ ಟೆಂಡರ್‌ದಾರರು ವರ್ಷದ ಮೊತ್ತಕ್ಕೆ ಶೇಕಡ 10 ರಷ್ಟನ್ನು ನಿಶ್ಚಿತ ಭದ್ರತಾ ಠೇವಣಿ ಸಲ್ಲಿಸತಕ್ಕದ್ದು ಮತ್ತು ರೂ.100-00 ಮೌಲ್ಯದ ಡಾಕ್ಯೂಮೆಂಟರಿ ಶೀಟ್‌ನಲ್ಲಿ ಕರಾರು ಪತ್ರವನ್ನು ಸಲ್ಲಿಸತಕ್ಕದ್ದು.
6) ಪ್ರತಿ ತಿಂಗಳು ಟೆಂಡರ್‌ದಾರರಿಂದ ಶೇಕಡ 2 ರಂತೆ ಆದಾಯ ತೆರಿಗೆಯನ್ನು ಪ್ರತಿ ತಿಂಗಳ ಬಿಲ್ಲಿನಲ್ಲಿ ಕಟಾವು ಮಾಡಲಾಗುವುದು.
7) ಟೆಂಡರ್‌ದಾರರ ಹೆಸರಿನಲ್ಲಿರುವ ಚಾಲ್ತಿಯಲ್ಲಿರುವ ಬೇಕರಿಯ ಅರ್ಹತಾಪತ್ರ (ಲೈಸೆನ್ಸ್) ಲಗತ್ತಿಸಬೇಕು.
8) ಸಾಲ್ವೆನ್ಸಿ ಸರ್ಟಿಫಿಕೇಟನ್ನು ಸಂಬಂಧಿಸಿದ ಅಧಿಕಾರಿಗಳ ಧೃಢೀಕರಣದೊಂದಿಗೆ ಅಥವಾ ಬ್ಯಾಂಕಿನ ಅಧಿಕಾರಿಗಳು ಧೃಢೀಕರಿಸಿದ ಗ್ಯಾರಂಟಿ ಸರ್ಟಿಫಿಕೇಟ್‌ನ್ನು ಕೋರ್ಟ್ ಅಫಿಡೆವಿಟ್‌ನೊಂದಿಗೆ ಸಲ್ಲಿಸತಕ್ಕದ್ದು. ಯಾವುದೇ ಕಾರಣಕ್ಕೂ ಬ್ಯಾಂಕ್ ಸಾಲ್ವೆನ್ಸಿಯನ್ನು ಅಥವಾ ಜಂಟಿ ಸಾಲ್ವೆನ್ಸಿಯನ್ನು ಒಪ್ಪಿಕೊಳ್ಳಲಾಗುವುದಿಲ್ಲ.
9) ದರ ಮತ್ತು ಬೆಲೆಗಳನ್ನು ಅಂಕಿಗಳಲ್ಲಿ ಮತ್ತು ಪದಗಳಲ್ಲಿ ಸ್ಪಷ್ಟವಾಗಿ ಸರಿಯಾಗಿ ನಮೂದಿಸಿರಬೇಕು.
10) ಸೂಚಿಸಿರುವ ವೇಳೆ ಮತ್ತು ದಿನಾಂಕವನ್ನು ಮೀರಿ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
11) ಟೆಂಡರ್ ಅವಧಿಯಲ್ಲಿ ಯಾವುದೇ ಪದಾರ್ಥಗಳ ದರವು ಟೆಂಡರ್ ದರವನ್ನು ಬಿಟ್ಟು ವ್ಯತ್ಯಾಸವಾದರೆ ವ್ಯತ್ಯಾಸವಾದ ದರವನ್ನು ಹೊಂದಲು ವಿಜೇತರಾದ ಟೆಂಡರ್‌ದಾರರು ಅರ್ಹರಾಗಿರುವುದಿಲ್ಲ. ಈ ನಿಬಂಧನೆಯನ್ನು ಸಹ ಒಪ್ಪಂದ ಪತ್ರದಲ್ಲಿ ನಮೂದಿಸಬೇಕು.
12) ದರಗಳು ಸಮಾನವಿದ್ದಲ್ಲಿ ಸ್ಥಳೀಯ ಟೆಂಡರ್‌ದಾರರಿಗೆ ಆದ್ಯತೆ ನೀಡಲಾಗುವುದು.
13) ಟೆಂಡರ್ ಫಾರಂನಲ್ಲಿ ನಮೂದಿಸಿರುವ ಎಲ್ಲಾ ನಿಬಂಧನೆಗಳಿಗೆ ಟೆಂಡರ್‌ದಾರರು ಬದ್ಧರಾಗಿರಬೇಕು.
14) ಉತ್ತಮ ಗುಣಮಟ್ಟದ ಆಹಾರ ಪದಾರ್ಥ ಮತ್ತು ಇತರೆ ಅವಶ್ಯಕ ಸಾಮಾಗ್ರಿಗಳನ್ನು ನೇರವಾಗಿ ಆಯಾ ತಾಲ್ಲೂಕು ಆಸ್ಪತ್ರೆಗಳಿಗೆ ಸರಬರಾಜು ಮಾಡಬೇಕು ಇದಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯ ಸಾರಿಗೆ ವೆಚ್ಚವನ್ನು ನೀಡಲಾಗುವುದಿಲ್ಲ.
15) ಟೆಂಡರ್‌ದಾರರು ಸರ್ಕಾರದ ಯಾವುದೇ ಇಲಾಖೆಯಿಂದ ಕಪ್ಪು ಪಟ್ಟಿಯಲ್ಲಿರಿಸಿದ ಸಂಸ್ಥೆಯೊಂದಿಗೆ ಅಥವಾ ಕಪ್ಪು ಪಟ್ಟಿಯಲ್ಲಿರಿಸಿದ ಸಂಸ್ಥೆಯ ಪಾಲುದಾರರೊಂದಿಗೆ ಸಂಬಂಧ ಹೊಂದಿರಬಾರದು.
16) ಅಪೂರ್ಣ ಮಾಹಿತಿ ಅಥವಾ ತಪ್ಪು ಮಾಹಿತಿ ನೀಡಿರುವ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ.
17) ಟೆಂಡರ್ ಸಲ್ಲಿಸುವ ಸಂಸ್ಥೆಯ : ಟೆಂಡರ್‌ದಾರರ ಸರಬರಾಜು ಕುರಿತಂತೆ ನ್ಯಾಯಾಲಯದಲ್ಲಿ ಯಾವುದೇ ವ್ಯಾಜ್ಯವು ಬಾಕಿ ಇರಬಾರದು.
18) ಟೆಂಡರ್ ಸಲ್ಲಿಸುವ ಏಜೆನ್ಸಿ ಸಂಸ್ಥೆಯು ಅಸ್ತಿತ್ವದಲ್ಲಿ ಇರತಕ್ಕದ್ದು ಸಬ್ ಲೀಜ್ ಮಾಡುವಂತಹ ಟೆಂಡರ್‌ದಾರರನ್ನು ಟೆಂಡರ್‌ದಾರರನ್ನಾಗಿ ಪರಿಗಣಿಸುವುದಿಲ್ಲ.
19) ಸರ್ಕಾರದ ಅನುದಾನ ಬಿಡುಗಡೆ ಹಾಗೂ ಅನುದಾನದ ಲಭ್ಯತೆಗೆ ಅನುಗುಣವಾಗಿ ಬಿಲ್ಲುಗಳನ್ನು ಪಾವತಿ ಮಾಡಲಾಗುವುದು. ಬಿಲ್ಲುಗಳ ಪಾವತಿ ವಿಳಂಬವಾದಲ್ಲಿ ಆಸ್ಪತ್ರೆಯ ಒಳರೋಗಿಗಳಿಗೆ ಯಾವುದೇ ತೊಂದರೆಯಾಗದಂತೆ ಆಸ್ಪತ್ರೆಯ ಇಂಡೆಂಟ್‌ಗೆ ತಕ್ಕಂತೆ ಸರಬರಾಜು ಮಾಡತಕ್ಕದ್ದು.
20) ಎಲ್ಲಾ ದಾಖಲಾತಿ ಪ್ರತಿಗಳನ್ನು ಪತ್ರಾಂಕಿತ ಅಧಿಕಾರಿಗಳಿಂದ ಧೃಢೀಕರಿಸಿ ಸಲ್ಲಿಸತಕ್ಕದ್ದು ಮತ್ತು ಟೆಂಡರ್ ತೆರೆಯುವ ಸಮಯದಲ್ಲಿ ಅಗತ್ಯ ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ಸಲ್ಲಿಸತಕ್ಕದ್ದು.
21) ಆಹಾರ ಪದಾರ್ಥಗಳಿಗೆ ಸಂಬಂಧಪಟ್ಟಂತೆ ಟೆಂಡರ್‌ದಾರರು ನಮೂದಿಸಿರುವ ದರಗಳನ್ನು ಪ್ರತ್ಯೇಕವಾಗಿ (ಐಟಂವಾರು) ಪರಿಗಣಿಸಿ ಕನಿಷ್ಟ ದರ ನಮೂದಿಸಿರುವ ಟೆಂಡರ್‌ದಾರರ ದರಗಳನ್ನು ಪರಿಗಣಿಸಲಾಗುವುದು.

**ಸಹಕಾರಿ ಸಂಘ ಸಂಸ್ಥೆಗಳು ಹಾಗೂ ಜನತಾ ಬಜಾರ್‌ನವರು ಈ ಕೆಳಗೆ ನಮೂದಿಸಲಾಗಿರುವ ದಾಖಲಾತಿಗಳನ್ನು ತಮ್ಮ ಒಪ್ಪಿಗೆ ಪತ್ರದ ಜೊತೆಗೆ ಸಲ್ಲಿಸಬೇಕು.**

1) ಟೆಂಡರ್ ಬೆಲೆಯ ಶೇಕಡ 5 ರಷ್ಟು ಮುಂಗಡ ಹಣವನ್ನು (ಇಎಂಡಿ ಠೇವಣಿಯನ್ನು) ಮೂಲ ಚಲನ್ ಸಹಿತ ಸಲ್ಲಿಸಬೇಕು ಹಾಗೂ ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯದಿಂದ ಪಡೆದ ಆರ್ಥಿಕ ಭದ್ರತಾ ಪತ್ರ ಸಲ್ಲಿಸಬೇಕು.

2) ಜನತಾ ಬಜಾರ್ ಹಾಗೂ ಕೋ ಆಪರೇಟಿವ್ ಸೊಸೈಟಿಯವರ ಗುತ್ತಿಗೆ ತಮ್ಮದೇ ಆದ ಪಕ್ಷದಲ್ಲಿ ಶೇಕಡ 10 ರಷ್ಟು ನಿಶ್ಚಿತ ಭದ್ರತಾ ಠೇವಣಿಯನ್ನು ಗೊತ್ತುಪಡಿಸಿದ ಅವಧಿಯಲ್ಲಿಯೇ ಸಲ್ಲಿಸತಕ್ಕದ್ದು.

3) ಸೂಚಿಸಲಾಗಿರುವ ವೇಳೆ ಹಾಗೂ ದಿನಾಂಕವನ್ನು ಮೀರಿ ಬಂದ ಒಪ್ಪಿಗೆ ಪತ್ರವನ್ನು ಹಾಗೂ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣ ತೋರಿಸದೆ ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಾಗೂ ಟೆಂಡರಿನ ಎಲ್ಲಾ ಹಕ್ಕನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ದಾವಣಗೆರೆ ಇವರಿಗೆ ಕಾಯ್ದಿರಿಸಲಾಗಿದೆ.

ಪಿ.ಡಿ. 24 ಜಿಲ್ಲಾ ಆರೋಗ್ಯ ಮತ್ತು ಕು.ಕ. ಅಧಿಕಾರಿಗಳು, ದಾವಣಗೆರೆ ಜಿಲ್ಲೆ, ದಾವಣಗೆರೆ.

**ನಮೂನೆ-I**

**(9ನೇ ನಿಯಮ ನೋಡಿ)**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು**

**ಸಂಖ್ಯೆ:ಎನ್‌ಆರ್‌ಎಸ್(4)111:02-03, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2004**

**ಶ್ರೀಮತಿ ಸಲೋಮಿ ದೇವ ಸಹಾಯಂ** ಶುಶ್ರೂಷಕಿ ಜಿಲ್ಲಾ ಆಸ್ಪತ್ರೆ, ಬಿಜಾಪುರ ಇವರಿಗೆ ತಮ್ಮ ಹೆಸರನ್ನು **ಸುಷ್ಮಾ ಪ್ರಭಾಕರ ಈಳಗೇರ** ಎಂದು ಬದಲಾವಣೆ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

ಪಿ.ಡಿ. 16 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

**ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯಗಳ ನಿರ್ದೇಶನಾಲಯ, ಕರ್ನಾಟಕ ರಾಜ್ಯ, ಮಡಿವಾಳ, ಬೆಂಗಳೂರು**

**ಟೆಂಡರ್ ಪ್ರಕಟಣೆ ಸಂಖ್ಯೆ: ಸಂಗ್ರಹ-5/1156/2004-05, ದಿನಾಂಕ: 3ನೇ ಫೆಬ್ರವರಿ 2005**

ಪೊಲೀಸ್ ಇಲಾಖೆಯ ಎಫ್.ಎಸ್.ಎಲ್. ಘಟಕಕ್ಕೆ ಅಗತ್ಯವಿರುವ ಈ ಕೆಳಕಂಡ ಉಪಕರಣಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು ಆಹ್ವಾನಿಸಲಾಗಿದೆ.

| Sl. No. | Name of the equipment | Quantity |
|---|---|---|
| 1. | HPTLC system | 02 |
| 2. | Stereo Microscope with accessories. | 02 |
| 3. | Automated TLC Spray | 03 |
| 4. | TLC Spreader with Frame (complete set) | 03 |
| 5. | High Velocity Measuring Equipment | 01 |
| 6. | Digital Camera with Printer and necessary Software | 03 |
| 7. | Cold Storage | 02 |
| 8. | Fuming Cupboards | 04 |

**ಸೂಚನೆ:** ತಯಾರಿಕಾ ಘಟಕ/ರೆಪ್ಯೂಟೆಡ್ ಏಜೆಂಟ್ ಮತ್ತು ರೆಪ್ಯೂಟೆಡ್ ಕಂಪನಿಗಳಿಗೆ ಆದ್ಯತೆ ನೀಡಲಾಗುವುದು.

ಟೆಂಡರ್ ಅರ್ಜಿಗಳನ್ನು ಹಾಗೂ ಪ್ರತಿಯೊಂದು ಉಪಕರಣದ ನಿರ್ದಿಷ್ಟತೆ/ವಿಶಿಷ್ಟತೆಯ ಮೂಲಕ (Specifications) ದಿನಾಂಕ: 8.2.05 ರಿಂದ 9.3.2005 ರವರೆಗೆ ಕೆಲಸಗಳ ದಿನದಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿ ನಮೂನೆಯ ಬೆಲೆ ರೂ.200/-ಗಳನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್ ನಲ್ಲಿ ಪಾವತಿಸಿದರೆ ತಿರಸ್ಕರಿಸಲಾಗುವುದು) ಟೆಂಡರ್ ಅರ್ಜಿಯಲ್ಲಿ ಅಂಚೆ ಮೂಲಕ ಪಡೆಯಲು ಇಚ್ಛಿಸುವವರು ರೂ.200/-ಗಳಿಗೆ ಡಿ.ಡಿ.ಯನ್ನು ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ, ಮಡಿವಾಳ, ಬೆಂಗಳೂರುರವರ ಹೆಸರಿನಲ್ಲಿ ಪಡೆದು ಕಳುಹಿಸಲು ಕೋರಲಾಗಿದೆ. ಹಾಗೂ ಸ್ವವಿಳಾಸ ಹೊಂದಿದ ಲಕೋಟೆಯ ಮೇಲೆ ರೂ.30/-ಗಳ ಅಂಚೆ ಚೀಟಿಯನ್ನು ಲಗತ್ತಿಸಿ ಕಳುಹಿಸಲು ಕೋರಿದೆ. ಭರ್ತಿ ಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಶೇಕಡ 2ರಷ್ಟು ಇ.ಎಂ.ಡಿ.ಯನ್ನು ಪ್ರತಿ ಉಪಕರಣದ ಮೌಲ್ಯಕ್ಕೆ ಮುಂಗಡ ಠೇವಣಿಯನ್ನು ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದ ಡಿ.ಡಿ. ಹಾಗೂ ಮಾದರಿಯ ಬ್ರೋಚರ್ಸ್, ಕ್ಯಾಟಾಲ್ಗ್ಸ್ ವಿತ್ ಟೆಕ್ನಿಕಲ್ ಸ್ಪೆಸಿಫಿಕೇಷನ್, ಮತ್ತು ಇತರೆ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಈ ಕಛೇರಿಯ ಡಾ: ಬಿ.ಎಂ. ಮೋಹನ್, ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ, ಮಡಿವಾಳ, ಬೆಂಗಳೂರುರವರಿಗೆ ಹೆಸರಿಸಿ ದಿನಾಂಕ: 9.3.2005ರ ಸಂಜೆ 5.00 ಗಂಟೆಯೊಳಗೆ ಸಲ್ಲಿಸತಕ್ಕದ್ದು. ಈ ದಿನಾಂಕದ ನಂತರ ಬಂದಂತಹ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ. ರಹಸ್ಯ ಲಕೋಟೆಯು ತುದಿಯಲ್ಲಿ ಎಫ್.ಎಸ್.ಎಲ್. ಘಟಕಕ್ಕೆ ಉಪಕರಣಗಳನ್ನು ಸರಬರಾಜು ಮಾಡುವ ಬಗ್ಗೆ ಅರ್ಜಿ ಎಂದು ನಮೂದಿಸಿರಬೇಕು ಹಾಗೂ ಲಕೋಟೆಯ ಸರಬರಾಜು ಮಾಡಲು ಬಯಸುವ ಸಂಸ್ಥೆಯ ವಿಳಾಸವನ್ನು ಒಳಗೊಂಡಿರಬೇಕು.

ಸ್ವೀಕರಿಸಿದ ಟೆಂಡರ್‌ಗಳನ್ನು ದಿನಾಂಕ: 10.3.2005 ರಂದು ಬೆಳಿಗ್ಗೆ 11.00 ಗಂಟೆಗೆ ಈ ಕಛೇರಿಯಲ್ಲಿ ತೆರಯಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು ಟೆಂಡರ್‌ಗಳನ್ನು ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.

ಪ್ರತಿ ಉಪಕರಣಗಳಿಗೆ ಪ್ರತ್ಯೇಕವಾಗಿ ಇ.ಎಂ.ಡಿ.ಯನ್ನು ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಮತ್ತು ಟೆಂಡರ್‌ದಾರರು ಅಂಚೆ ಮೂಲಕ/ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿ ಮತ್ತು ದಾಖಲಾತಿಗಳು ತಡವಾಗಿ ತಲುಪಿದಲ್ಲಿ/ನಾಶವಾದಲ್ಲಿ ಇಲಾಖೆಯ ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೆ ಸಾರಾಸಗಟಾಗಿ/ಭಾಗಶಃ ಒಪ್ಪಿಕೊಳ್ಳುವ, ಹೆಚ್ಚು ಮತ್ತು ಕಡಿಮೆ ಮಾಡುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಪಿ.ಆರ್. 81 ನಿರ್ದೇಶಕರು, ನ್ಯಾಯ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು.

